ಅಕ್ಟೋಬರ್ 2016

BANNERUGHATTA

**WILDLIFE CONSERVATION GROUP**

* ಮಂಕಿ ಪಜಲ್ ಚಿಟ್ಟೆ
* ಅಸಾಸ್ಸಿನ್ ಬಗ್
* ಹೂಗಳ ಸುಗಂಧ ಅರಿಯದ ದುಂಬಿ!
* ಪ್ರಕೃತಿ ಬಿಂಬ
* ಜೇನಿನ ಜೀವನ (ಕವನ)





**ಲೇಖಕ ವೃಂದ**

ಮಹದೇವ ಕೆ. ಸಿ.

ವಿಪಿನ್ ಬಾಳಿಗ

ಜೈಕುಮಾರ .ಆರ್

ಕಾರ್ತಿಕ್ .ಎ .ಕೆ

ಧನರಾಜ್ .ಎಂ

**ವಿನ್ಯಾಸ**

ಅಶ್ವಥ .ಕೆ.ಎನ್

**ಮುಖಪುಟ ಛಾಯಾಚಿತ್ರ**

ಶ್ರೀನಿವಾಸ್ .ಕೆ .ಎಸ್

**ಪರಿಷ್ಕರಣೆ**

ಮುರಳಿ .ಎಸ್



# ಮಂಕಿ ಪಜಲ್ ಚಿಟ್ಟೆ

ಅಂದು ಭಾನುವಾರ ಮುಂಜಾನೆ ಸುಮಾರು ಆರುಗಂಟೆ ಸಮಯ. ಸುತ್ತಲೂ ಕವಿದ ಮಂಜಿನಿಂದ ಚಳಿ ದ್ವಿಗುಣಗೊಂಡಿತ್ತು. ಪೂರ್ವದಲ್ಲಿ ಆಗ ತಾನೇ ಮೋಡಗಳ ನಡುವೆ ಸೂರ್ಯ ಇಣುಕುತ್ತಿದ್ದ. ಇತ್ತ ಭಾನುವಾರ ಎಲ್ಲಾದರು ಸುತ್ತಿ ಬರುವ ತವಕ ಚಳಿಯಲ್ಲಿ ಮೈಕೊಡವಿ ಏಳುವಂತೆ ಮಾಡಿತ್ತು. ಎದ್ದವನೆ ಮುಖ ತೊಳೆದುಕೊಂಡು, ಚಹಾ ಕುಡಿದು ಸ್ನೇಹಿತ ಅಶ್ವತ್ತಣ್ಣನ ಜೊತೆ ಸೇರಿ ಕಾಡು ಸುತ್ತಲೆಂದು ಕ್ಯಾಮರಾವನ್ನ ಹೆಗಲಿಗೇರಿಸಿ ಹೊರಟೆವು, ಮನೆಯಿಂದ ಬೈಕಿನಲ್ಲಿ ಶಿವನಹಳ್ಳಿ ಸೇರಿದ ನಾವು ತಿಂಡಿ ಮುಗಿಸಿ ಕಾಲ್ನಡಿಗೆಯಲ್ಲಿ ಕಾನನದ ಒಳಹೊಕ್ಕೆವು. ದಾರಿಯುದ್ದಕ್ಕೂ ಸಿಗುವ ಪಕ್ಷಿಗಳನ್ನ ವೀಕ್ಷಿಸುತ್ತಾ ಚಿಟ್ಟೆ- ಕೀಟಗಳನ್ನ ಫೋಟೋ ತೆಗೆಯುತ್ತಾ, ಸುತ್ತಲಿನ ಪರಿಸರವನ್ನ ಆನಂದಿಸುತ್ತಾ, ಹಲವಾರು ವಿಚಾರಗಳನ್ನ ವಿನಿಮಯ ಮಾಡಿಕೊಳ್ಳುತ್ತಾ, ದೊಡ್ಡಿ ಬೆಟ್ಟ ತಲುಪಿದೆವು. ಇಲ್ಲಿಗೆ ನಾನು ಹಲವಾರು ಬಾರಿ ಬಂದಿದ್ದೇನೆ ಆದರೆ ಪ್ರತೀ ಬಾರಿ ಬಂದಾಗಲೂ ನಮಗೆ ಹೊಸ ಅನುಭವ. ಆದ್ದರಿಂದ ಇಲ್ಲಿನ ಪ್ರತೀ ಭೇಟಿಯೂ ನನಗೆ ಹೊಸದಂತೆ ಭಾಸವಾಗುವುದು ಪ್ರಕೃತಿಯ ವಿಸ್ಮಯವೇ ಸರಿ.... ಬೆಟ್ಟದ ಮೇಲೆ ಕೂತ ನಮಗೆ ಸುತ್ತಲಿನ ಕಾನನವು ಹಸಿರು ಭದ್ರಕೋಟೆಯಂತೆ ಭಾಸವಾಗುತ್ತಿತ್ತು.

ಸುಮಾರು ಸಮಯವನ್ನ ಕಳೆದ ನಮಗೆ ಸಮಯ ಮಧ್ಯಾಹ್ನ ಹನ್ನೆರೆಡೆಂದು ಅರಿವಾದದ್ದು ಹೊಟ್ಟೆ ತಾಳ ಹಾಕಲಾರಂಭಿಸಿದಾಗಲೇ. ನಂತರ ಅಲ್ಲಿಂದ ಹಿಂದಿರುಗುವ ದಾರಿಯನ್ನು ಹಿಡಿದೆವು... ಒಂದು ಗಿಡದ ತುಂಬೆಲ್ಲಾ ಜೇನುಹುಳಗಳಂತೆ ತುಂಬಿದ್ದ ಆ ಕೀಟಗಳು ಕೊಂಚ ವಿಚಿತ್ರವಾಗಿದ್ದವು. ಕೇವಲ ತನ್ನ ಕೆಂಪು ತಲೆಯನ್ನ ಮೇಲೆ

ಕೆಳಗೆ ಆಡಿಸುತ್ತಿದ್ದ ಆ ಕಂಬಳಿಹುಳುಗಳು ಗಿಡದಲ್ಲಿನ ಎಲ್ಲ ಎಲೆಗಳ ಮೃಷ್ಟಾನ್ನ ಭೋಜನ ಮಾಡುವ ಬ್ಯುಸಿಯಲ್ಲಿದ್ದವು. ಅಲ್ಲಿಯೂ ಕೆಲವು ಫೋಟೋ ಕ್ಲಿಕ್ಕಿಸಿ, ನಾನು "ಇನ್ ಸ್ವಲ್ಪ ದಿನ ಬಿಟ್ಟು ಬಂದ್ರೆ ಎಲ್ಲ ಗೂಡು ಕಟ್ಟಿರ್ತಾವೆ" ಎಂದೆ. " ಹೂಂ ಇದು ಚಿಟ್ಟೆಗಳ ಸೀಜನ್ನು ಬೇಜಾನ್ ಚಿಟ್ಟೆ ಸಿಕ್ತಾವೆ ಮುಂದೆ ನೋಡಕೊಂಡ್ ಬಾ" ಎಂದರು ಅಶ್ವಥಣ್ಣ. ಬನ್ನೇರುಘಟ್ಟ ಕಾಡು ಅಕ್ಟೋಬರ್ ತಿಂಗಳಲ್ಲಿ ಸ್ವರ್ಗವೇ ಸರಿ, ಕಾಡಿನಲ್ಲಿ ಸಣ್ಣ ಸಣ್ಣ ಗಿಡಗಳು, ಹುಲ್ಲುಜಾತಿಯ ಸಸ್ಯಗಳು, ಕೆಲ ಮರಗಳು ಹೂವು ಬಿಡುವ ಸಮಯವಾದುದರಿಂದ ಎಲ್ಲಿಲ್ಲದ ಚಿಟ್ಟೆಗಳು ಬಂದು ಬಿಡುತ್ತವೆ. ಚಿಟ್ಟೆಗಳ ವೀಕ್ಷಣೆಗೆ ಈ ಸಮಯ ಸುಸಂದರ್ಭ ಎಂದೆನಿಸಿತು. ಸ್ವಲ್ಪ ದೂರ ಹೋಗುತ್ತಿದ್ದಂತೆಯೇ ಒಂದು ಚಿಟ್ಟೆ ತನ್ನ ಸಂಗಾತಿಯೊಂದಿಗೆ ಬಂದು ಗಿಡದ ಮೇಲೆ ಕುಳಿತುಕೊಂಡಿತ್ತು. ಬಿಳಿ, ಕಂದು, ಹಳದಿ ಬಣ್ಣದಿಂದ ಕೂಡಿದ ರೆಕ್ಕೆಯ ಮೇಲೆ ಅನಿಯಮಿತ ಯೂ ಆಕಾರದ ಕಪ್ಪುಗೆರೆಗಳಿಂದ ಕೂಡಿದ್ದ ಆ ಚಿಟ್ಟೆಯ ಹಿಂಬದಿ ರೆಕ್ಕೆಯಲ್ಲಿ ಮೂರು ಬಾಲದಂತ ಆಕಾರಗಳಿದ್ದವು. ತಕ್ಷಣ ಬ್ಯಾಗಿನಲ್ಲಿದ್ದ ಚಿಟ್ಟೆಗಳ ಪುಸ್ತಕವನ್ನ ತೆಗೆದು ಹುಡುಕಿದಾಗ ಇದು ವಿಸ್ಮಯ (MONKEY PUZZLE) ಎಂದು ತಿಳಿಯಿತು.




ಲೈಸೀನಿಡೇ (LYCAENIDAE) ಕುಟುಂಬಕ್ಕೆ ಸೇರಿದ ಈ ಚಿಟ್ಟೆಗಳು ನೀಲಿಗಳು (BLUES) ಎಂದು ಕರೆಯಲ್ಪಡುತ್ತವೆ. ಈ ಕುಟುಂಬವು ವಿಶ್ವದಾದ್ಯಂತ ಆರು ಸಾವಿರಕ್ಕೂ ಪ್ರಭೇದಗಳಿದ್ದು ಭಾರತದಲ್ಲಿ ಸುಮಾರು 446 ಪ್ರಭೇದಗಳನ್ನು ನೋಡಬಹುದು. ಕರ್ನಾಟಕದಲ್ಲಿ ಸುಮಾರು 98 ಪ್ರಭೇದಗಳು ಕಾಣಸಿಗುತ್ತವೆ. ಇವುಗಳಲ್ಲಿ ವಿಸ್ಮಯ (MONKEY PUZZLE) ಚಿಟ್ಟೆಯೂ ಒಂದು.

ಈ ಚಿಟ್ಟೆಗಳ ರೆಕ್ಕೆಯ ತುದಿಯಲ್ಲಿ ಬಾಲಗಳಂತಹ ಮೂರು ವಿನ್ಯಾಸಗಳು ಇರುವುದರಿಂದ ಶತೃಗಳಿಗೆ ತಲೆಯಾವುದು ಬುಡಯಾವುದು ಎಂಬುದುನ್ನ ಗುರುತಿಸಲು ಕಷ್ಟವಾಗುವುದಕ್ಕೆ ಈ ಚಿಟ್ಟೆಗೆ MONKEY PUZZLE ಎಂದು ಕರೆಯುವುದುಂಟು. ಇಂತಹ ವಿನ್ಯಾಸಗಳಿಂದ ಈ ಚಿಟ್ಟೆಗಳು ತನ್ನ ಶತೃಗಳ ಕಾಟದಿಂದ ತಪ್ಪಿಸಿಕೊಂಡು ಬದುಕುವುದನ್ನು ವಿಕಾಸದಲ್ಲಿ ಕಲಿತುಕೊಂಡು ಮಾರ್ಪಾಡುಗಳನ್ನ ಮಾಡಿಕೊಂಡಿವೆ. ಈ ಚಿಟ್ಟೆಗಳು ಹೆಚ್ಚು ಎತ್ತರಕ್ಕೆ ಹಾರಲಾಗದೆ ತಳಮಟ್ಟದಲ್ಲೇ ಹಾರಾಡುತ್ತವೆ.



**ರೆಕ್ಕೆಯ ಮೇಲ್ಭಾಗ:** ಚಿಟ್ಟೆಯ ರೆಕ್ಕೆಯ ಮೇಲ್ಭಾಗವು ಗಾಡ ಕಂದು ಬಣ್ಣದಿಂದ ಕೂಡಿದ್ದು ರೆಕ್ಕೆಯ ಕೊನೆಯಲ್ಲಿ ಬಿಳಿ ಚುಕ್ಕೆಯನ್ನು ಹೊಂದಿವೆ ಮತ್ತು ಮುಂದಿನ ರೆಕ್ಕೆಗಳಲ್ಲಿ ಬಿಳಿ ಬಣ್ಣದ ಎರಡರಿಂದ ಮೂರು ಚುಕ್ಕಿಗಳಿರುತ್ತವೆ. ಹಿಂದಿನ ರೆಕ್ಕೆಯ ತುದಿಯಲ್ಲಿ ಕಪ್ಪು ಬಣ್ಣದಿಂದಾವರಿಸಿದ ಕಿರಿದಾದ ಗಾಡಕಂದು ಬಣ್ಣದ ಚುಕ್ಕಿಗಳಿರುತ್ತವೆ.

**ರೆಕ್ಕೆಯ ಕೆಳಭಾಗ:** ರೆಕ್ಕೆಯ ಕೆಳಭಾಗವು ಕಡು ಹಳದಿ, ಕಂದು, ಬಿಳಿ ಬಣ್ಣಗಳಿಂದ ಕೂಡಿರುತ್ತದೆ. ಮುಂದಿನ ರೆಕ್ಕೆಗಳಲ್ಲಿ ಬಾಗಿರುವಂತಹ ವಕ್ರಾಕಾರದ ಅನಿಯಮಿಯ ಬಿಳಿಗೆರೆಗಳಿರುತ್ತವೆ. ಹಿಂದಿನ ರೆಕ್ಕೆಗಳಲ್ಲಿ ಕೊನೆಯ ಎರಡು ಗೆರೆಗಳು ಕಡು ಕಂದು ಬಣ್ಣವಿರುತ್ತದೆ. ಹಾಗೂ ಕಪ್ಪು ರೇಖೆಗಳು ಬೆಳ್ಳಿ ಬಣ್ಣದ ಅಂಚುಗಳಿಂದ ಕೂಡಿದ್ದ ಕೊನೆಯಲ್ಲಿ ಮೂರು ಬಾಲಾದಾಕಾರವನ್ನ ಹೊಂದಿರುತ್ತವೆ.

ಹಾಗೆ ಬೆಟ್ಟದ ದಾರಿಯಲ್ಲಿ ಕಂಡ ಚಿಟ್ಟೆಗಳ ವೈಭವವು ಬನ್ನೇರುಘಟ್ಟ ಕಾಡಿನ ಚಿಟ್ಟೆ ಸಂತತಿಯ ವೈವಿಧ್ಯತೆಯನ್ನು ತೊರುತ್ತಿತ್ತು. ಬೆಟ್ಟದಿಂದ ಕೆಳಗಿಳಿದು ಬರುವಷ್ಟರಲ್ಲಿ ಮೂವತ್ತಕ್ಕೂ ಹೆಚ್ಚು ಜಾತಿಯ ಚಿಟ್ಟೆಗಳನ್ನು ನೋಡಿ ಆಶ್ಚರ್ಯವಾಯಿತು. ಯಾವಾಗಲಾದರು ಒಮ್ಮೆ ಈ ಬನ್ನೇರುಘಟ್ಟ ಕಾಡಿನಲ್ಲಿರುವ ಚಿಟ್ಟೆಗಳ ಗಣತಿ ನಡೆಸಿದರೆ ಹೇಗೆ? ಎಂದೆನಿಸಿತು.

ಮುಂದಿನ ವರ್ಷ ನಮ್ಮ ತಂಡದ ಕಾರ್ಯಕ್ರಮಗಳಲ್ಲಿ ಚಿಟ್ಟೆಯ ಗಣತಿಯನ್ನು ಸೇರಿಸುವ ಯೋಚನೆಯನ್ನು ಮಾಡುತ್ತಾ ಹೊಟ್ಟೆ ಹಸಿವನ್ನು ತಾಳದೆ ಬೇಗ ಬೇಗ ಮನೆಯತ್ತ ನಡೆದೆವು.



- ಮಹದೇವ .ಕೆ .ಸಿ



# ಅಸಾಸ್ಸಿನ್ ಬಗ್

ಅಸಾಸ್ಸಿನ್ ಬಗ್ ಗಳು ಬಹಳ ತಾಳ್ಮೆಯಿಂದ ಕೂಡಿದ ಸಮರ್ಥ ಬೇಟೆಗಾರ ಜೀವಿಗಳಾಗಿವೆ. ಈ ತಾಳ್ಮೆಯ ಬೇಟೆಗಾರರು ಸದ್ದಿಲ್ಲದೆ ತನ್ನ ಬಳಿ ಹಾದುಹೋಗುವ ಕ್ರಿಮಿಕೀಟಗಳ ಮೇಲೆ ಹರಿಹಾಯ್ದು ನಿಸ್ಸಂದೇಹವಾಗಿ ಕೊಂದು ತಿನ್ನುತ್ತವೆ.

ಈ ತರಹದ ಅಸಾಸ್ಸಿನ್ ಬಗ್ ಗಳಲ್ಲಿ ನೂರಾರು ಬಗೆಗಳಿವೆ, ಪ್ರತಿಯೊಂದು ತನ್ನದೇ ಆದ ವಿಚಿತ್ರ ಆಕೃತಿ, ಬೇಟೆಯ ಆದ್ಯತೆ ಮತ್ತು ಬೇಟೆಮಾಡುವ ತಂತ್ರಗಾರಿಕೆಯನ್ನು ಹೊಂದಿರುತ್ತವೆ. ಇವು ಆಹಾರಕ್ಕಾಗಿ ಸಣ್ಣ ಎಫ್ಫಿಡ್ಸ್ ಗಳಿಂದ ಹಿಡಿದು ದೊಡ್ಡ ಮಿಲ್ಲಿಪೀಡ್ ಗಳನ್ನು ಅವಲಂಬಿಸಿವೆ.

ಥ್ರೆಡ್ ಲೆಗ್ಡ್ ಅಸಾಸ್ಸಿನ್ ಬಗ್ ಗಳು ಆಹಾರಕ್ಕಾಗಿ ಹೆಚ್ಚು ಜೇಡಗಳನ್ನು ಅವಲಂಬಿಸಿರುದರಿಂದ "**ಜೇಡ ತಜ್ಞ**" ಎಂದೇ ಹೆಸರುವಾಸಿಯಾಗಿವೆ. ಅದರಲ್ಲೂ ಕೆಲವು ಕೀಟಗಳಂತೂ ತಮ್ಮ ಇಡೀ ಜೀವಮಾನವನ್ನು ಜೇಡಗಳ ಬಲೆಯಲ್ಲೇ ಕಳೆಯುತ್ತವೆ.  ಮೊಟಕು ರೆಕ್ಕೆಯ ಥ್ರೆಡ್ ಲೆಗ್ಡ್ ಅಸ್ಸಸ್ಸಿನ್ ಬಗ್ ಗಳು ಬೇಟೆಯನ್ನು ಹುಡುಕುತ್ತಾ ಜೇಡರ ಬಲೆಗಳನ್ನು ಪ್ರವೇಶಿಸುತ್ತವೆ.

ಈ ಕೀಟಗಳು ತನ್ನ ಬೇಟೆಯ ಚಾಣಕ್ಷತನದಿಂದಲೇ ಅಸ್ಸಸ್ಸಿನ್ ಬಗ್  ಎಂದು ಹೆಸರು ಪಡೆದಿವೆ. ಈ ಥ್ರೆಡ್ ಲೆಗ್ಡ್ ಅಸಾಸ್ಸಿನ್ ಬಗ್ ಕೀಟವು ಜೇಡರ ಬಲೆಯಲ್ಲಿ ಜೇಡಕ್ಕೂ ಸಹ ತಿಳಿಯದಂತೆಯೇ ತಟಸ್ಥವಾಗಿ ಒಂದು ಕಡೆ ಬಂದು ಕುಳಿತಿರುತ್ತವೆ. ಈ ಕೀಟಕ್ಕೆ ಜೇಡವು ಕಂಡಾಕ್ಷಣವೇ ಬಲೆಗೆ ಸಿಕ್ಕಿಕೊಂಡ ಬೇಟೆಯಂತೆ ಒದ್ದಾಡುವ ರೀತಿ ನಾಟಕ ಮಾಡುತ್ತದೆ. ಜೇಡ ಎಳೆದಿರುವ ರೇಷ್ಮೆಯ ದಾರವನ್ನು ತನ್ನ ಉದ್ದನೆಯ ಕಾಲುಗಳಿಂದ ಎಳೆಯುತ್ತದೆ. ತಕ್ಷಣ ಬಲೆಯ ಕಂಪನವನ್ನು ಅರಿತ ಜೇಡವು, ಕಂಪನದ ಉಗಮಸ್ಥಾನದ ಕಡೆ ಓಡಲಾರಂಭಿಸುತ್ತದೆ.



ಸ್ವಲ್ಪದೂರ ಚಲಿಸುವುದರಲ್ಲೇ ಜೇಡವು ಅನುಮಾನದಿಂದಲೋ ಅಥವಾ ಬಿದ್ದ ಬೇಟೆಯೂ ನಿಜವೊ ಇಲ್ಲವೊ ಎಂದು ಖಾತ್ರಿಪಡಿಸಿಕೊಳ್ಳಲು ನಿಲ್ಲುತ್ತದೆ. ಆದರೆ ಈ ಅಸಾಸ್ಸಿನ್ ಬಗ್ ಕೀಟ ಹತ್ತಿರ ಬಂದು ನಿಂತಿರುವುದನ್ನು ತಿಳಿದು ನಿಧಾನವಾಗಿ ಜೇಡಕ್ಕೂ ಸಹ ತಿಳಿಯದಂತೆ ಚಲಿಸಿ ಪಟ್ಟನೆ ಜೇಡವನ್ನು ತನ್ನ ಉದ್ದನೆಯ ಕೈಗಳಿಂದ ಹಿಡಿದು ಕ್ಷಣಮಾತ್ರದಲ್ಲಿ ಅದನ್ನು ಕೊಂದು ನಿಧಾನವಾಗಿ ಜೇಡದ ದೇಹದಲ್ಲಿನ ರಸವನ್ನು ಹೀರಿ ದೇಹದ ಉಳಿದ ಅವಶೇಷಗಳನ್ನು ಜೇಡರ ಬಲೆಯಿಂದ ಕೆಳಗೆ ಉದುರಿಸುತ್ತದೆ. ಪ್ರಕೃತಿಯ ಅನೇಕ ನಿಯಮಗಳು ಅಚ್ಚರಿ ಮೂಡಿಸುತ್ತವೆ.

ಮೂಲ ಲೇಖನ ಮತ್ತು ಛಾಯಾಚಿತ್ರಗಳು : - ವಿಪಿನ್ ಬಾಳಿಗ

ಅನುವಾದ : - ಗಿರೀಶ್ .ಕೆ .ಎಂ





# ಹೂಗಳ ಸುಗಂಧ ಅರಿಯದ ದುಂಬಿ!

'ದಸರಾ ಸಂಭ್ರಮದ ದಿನಗಳು' ಮುಖ್ಯವಾಗಿ 'ಆಯುಧ ಪೂಜೆ'. ಎಲ್ಲಿ ನೋಡಿದರೂ ಕೆಲಸದಲ್ಲಿ ಮಗ್ನರಾಗಿದ್ದ ಜನರು. ಆಗತಾನೆ ಎದ್ದು ಹೊರಬಂದ ನನಗೆ ಕಂಡದ್ದು ಎಲ್ಲ ಹೆಂಗಸರು ಮನೆ ಮುಂದೆ ರಂಗೋಲಿ ಹಾಕುತ್ತಿರುವುದು, ಗಂಡಸರ ಗಾಡಿಗಳ ಸಿಂಗಾರವೂ ಅದಕ್ಕೆ ಸ್ಪರ್ಧಿಯಂತಿದ್ದವು. ಅಹ್ ಪರವಾಗಿಲ್ಲ ಅಂದುಕೊಂಡು ಸ್ವಲ್ಪ ಮುಂದೆ ಹೋಗಿ ಗಮನಿಸಿದರೆ, ಸಿಂಗಾರದ ವಸ್ತುಗಳು ಹೆಚ್ಚಾಗಿ ಬಣ್ಣ ಬಣ್ಣದ ಕಾಗದಗಳಾಗಿದ್ದವು. ಕೆಲವು ಹೂಗಳೂ ಕೂಡ. ಸುವಾಸನೆ ಬಾರದೆ ಇದ್ದರೂ ಸ್ವಾಭಾವಿಕ ಹೂಗಳಿಗಿಂತ ಹೆಚ್ಚು ಆಕರ್ಷಕ ಬಣ್ಣದ ಹೂಗಳಾಗಿದ್ದವು. ಅಷ್ಟೇ ಅಲ್ಲದೆ ಒಬ್ಬೊಬ್ಬರ ಮನೆಯಲ್ಲೂ ಕನಿಷ್ಟ ಒಂದು ಗಾಡಿ ಇದ್ದೇ ಇತ್ತು. ಹಾಗೆ ನೋಡಿದರೆ ನೂರಾರು ಗಾಡಿಗಳು ನಮ್ಮ ಊರಲ್ಲೇ ಇತ್ತು. ನಮ್ಮಂತ ಹಳ್ಳಿಯಲ್ಲಿಯೇ ಇಷ್ಟು ಗಾಡಿಗಳು ಇರಬೇಕಾದ್ರೆ ಇನ್ನು ಸಿಟಿಯಲ್ಲಿ? ದೇಶದಲ್ಲಿ?? ಪ್ರಪಂಚದಲ್ಲಿ??? ಅದರಿಂದ ಬರೋ ಹೊಗೆ? ಮಾಲಿನ್ಯ!?

ಹಿಂದಿನ ಒಂದು ಸಂಚಿಕೆಯಲ್ಲಿ ತಿಳಿಸಿರೋ ಹಾಗೆ ದುಂಬಿಗಳ / ಕೀಟಗಳ ಪರಾಗಸ್ಪರ್ಶ ಕ್ರಿಯೆಯಿಂದಲೇ ಸಸ್ಯವರ್ಗದ ಪೀಳಿಗೆಗಳು ಲಕ್ಷಾಂತರ ವರ್ಷಗಳಿಂದ ಉಳಿದು ಬಂದಿರುವುದು. ಅವುಗಳಿಂದ ಪ್ರಾಣಿಗಳು. ನಂತರ ಈಗ 'ವಿಕಾಸ'ದ ತುದಿಯಲ್ಲಿ ನಾವು ಮನುಷ್ಯರು. ಎಲ್ಲ ಸರಿ…ಈ ದಸರಾ ಸಂಭ್ರಮಕ್ಕೂ, ಸುವಾಸನೆ ಬರದ ಹೂಗಳಿಗೂ, ಗಾಡಿಗಳಿಗೂ, ದುಂಬಿಗಳಿಗೂ ಮತ್ತು ಜೀವ ವಿಕಾಸ ಬೆಟ್ಟಕ್ಕೂ ಏನು ಸಂಬಂಧ? ಮುಂದೆ…ಓದಿ.

ವಾಯುಮಾಲಿನ್ಯದ ಕಾರಣಗಳಲ್ಲಿ ಮುಖ್ಯವಾದದ್ದು ಈ ವಾಹನಗಳ ಹೊಗೆ. ಇವುಗಳಲ್ಲಿನ ಚಿಕ್ಕ ಸೈಲೆನ್ಸರ್ (silencer) ಪೈಪಿನಿಂದ ಬರುವ ಹೊಗೆ ಇಡೀ ಭೂಮಿಯನ್ನೇ ಅಲುಗಾಡಿಸುವಲ್ಲಿ ಸಾಕಷ್ಟು ಈಗಾಗಲೇ

ಯಶಸ್ವಿಯಾಗಿದೆ. ಉದಾಹರಣೆಗೆ ಹಿಂದಿನ ಸಂಚಿಕೆಯಲ್ಲಿ ಹೇಳಿದ ಹಾಗೆ ಜಾಗತಿಕ ತಾಪಮಾನದಿಂದ (Global Warming) ದೃವಗಳಲ್ಲಿನ ಹಿಮಗಡ್ಡೆಗಳು ಕರಗುತ್ತಿರುವುದು. ಅದು ಸಾಲದು ಎಂಬಂತೆ **ನಮ್ಮ ದುಂಬಿಗಳಿಗೂ** ಒಂದು ಸವಾಲೊಡ್ಡಿದೆ. ಅದೇ ಇಲ್ಲಿನ ಮೂಲ ಲೇಖನ!.



***ಸಹಜವಾಗಿ ದುಂಬಿಗಳು ಹೂಗಳನ್ನು ಅವುಗಳ ಸುವಾಸನೆಯಿಂದ ಸುಲಭವಾಗಿ ಕಂಡುಹಿಡಿಯುತ್ತವೆ***

ಹೌದು, ಈ ಬಗೆಯ ವಾಯು ಮಾಲಿನ್ಯದಿಂದ ದುಂಬಿಗಳು ಹೂಗಳ ಸುಗಂಧ ಗ್ರಹಿಕೆಯಲ್ಲಿ ತೊಂದರೆ ಉಂಟು ಮಾಡುತ್ತವೆ "ರಾಯನ್ ಜೇಮ್ಸ್ ಲಿಯೊನಾರ್ಡ್" Ryan James Leonard of the University of Sydneyಯ ಇತ್ತೀಚೆಗಿನ ಸಂಶೋಧನೆ ಹೇಳಿದೆ. ಇವರು ನಡೆಸಿದ ಸಂಶೋಧನೆಯಲ್ಲಿ, ಮೊದಲಿಗೆ ದುಂಬಿಗಳು ಗ್ರಹಿಸಬಲ್ಲ ಹೂ ಸುಗಂಧವನ್ನು ಆರಿಸಿದರು. ಅದನ್ನು ಅವುಗಳು ಸುಲಭವಾಗಿ ಕಂಡು ಹಿಡಿದು ಹತ್ತಿರ ಬಂದವು. ನಂತರ ಅವುಗಳಿಗೆ ಹೂಗಳಲ್ಲಿ ಸಿಗುವ ಹಾಗೆ ಮಕರಂದ ಕೊಡಲಾಯಿತು. ತದನಂತರ ಅದೇ ಹೂ ಸುಗಂಧಕ್ಕೆ ಸ್ವಲ್ಪ ವಾಹನಗಳ ಹೊಗೆ ಸೇರಿಸಲಾಯಿತು. ಈಗ ಅವುಗಳು ಮೊದಲ ಪ್ರಯತ್ನದಲ್ಲೇ ಕಂಡು ಹಿಡಿಯಲು ವಿಫಲವಾದವು. ಇದನ್ನೇ ಆಧಾರವಾಗಿ ಇಟ್ಟುಕೊಂಡು ರೈಯನ್ ಅವರ ಶಿಷ್ಯರು ನಡೆಸಿದ ಪ್ರಯೋಗದ ಫಲಿತಾಂಶ, ಹೂ ಸುಗಂಧಗಳಲ್ಲಿ ಹೆಚ್ಚಾಗಿರುವ ಲಿನಲೂಲ್ (linalool) ಜೊತೆಗೆ ವಾಹನದ ಹೊಗೆ ಸೇರಿಸಿದರೂ... ಹೆಚ್ಚು ದುಂಬಿಗಳು ಗ್ರಹಿಸಿದವು. ಆದರೆ ಈ ವಾಹನಗಳ ಹೊಗೆಯಿಂದ ಹೂ ಸುಗಂಧಗಳಲ್ಲಿ ಸಿಗುವ -ಮೈರ್ಸೇನೆ (myrcene) ಗೆ ಮೂರು ಪ್ರಯತ್ನಗಳು, ಡಿಪೆಂಟೆನೆ (dipentene) ಗೆ ನಾಲ್ಕು ಪ್ರಯತ್ನಗಳು ಹಾಗೂ ಮಿಶ್ರಿತ ಜರೇನಿಯಮ್ಸ್ (geraniums)ಗೆ ಆರು ಸತತ ಪ್ರಯತ್ನಗಳ ನಂತರ ಕಂಡು ಹಿಡಿಯಲು ಸಾಧ್ಯವಾಯಿತು.



**ಕನೋಲ ಹೂ**

ಅಲ್ಲದೆ ಇವುಗಳಿಗೆ ಪೂರಕವೆಂಬಂತೆ 2013 ರ ಒಂದು ಸಂಶೋಧನೆ ಪ್ರಕಾರ ಡೀಸಲ್ ವಾಹನಗಳ ಹೊಗೆಯಿಂದ ಕನೋಲ (canola flower) ಹೂಗಳ ಕೆಲ ರಾಸಾಯನಿಕ ಅಂಶಗಳು ಮಾರ್ಪಾಡುಗೊಂಡು, ದುಂಬಿಗಳು ಅವುಗಳನ್ನು ಗ್ರಹಿಸುವಲ್ಲಿ ವಿಫಲವಾದವು ಎಂಬುದು.

'ಇವೆಲ್ಲ ಹೀಗೇಕೆ?' ಅನ್ನೋ ಹಾಗಿಲ್ಲ. ಏಕೆಂದರೆ ಇದರ ಬಗ್ಗೆ "ಈಗಲೂ" ಯೋಚನೆ ಮಾಡದಿದ್ರೆ "ನಾಳೆ" ಅನ್ನೋದು ನಮಗೆ ಎಟುಕುವುದಿಲ್ಲ. ಅದು ಅರಿವಾಗೋ ಸನ್ನಿವೇಶಗಳು ನಮಗಾಗಲೇ ಎಷ್ಟೋ ಬಂದಿವೆ. ಅವುಗಳಲ್ಲಿ ಇದೂ ಒಂದು!!!.

ಮೂಲ ಲೇಖನ: societyforscience.org



ಜರೇನಿಯಮ್ಸ್ ಹೂವುಗಳು



- ಜೈ ಕುಮಾರ್ .ಆರ್


©Karthik Ak


ನಾನು ಮಂಡಲವಲ್ಲ! ವಿಷವಿಲ್ಲ!
ನಾನು ಮಣ್ಣಾವು.


ಚಿಂತಾಕ್ರಾಂತಗೊಂಡ ಎಲೆಹಕ್ಕಿಗೆ
ಹೂವಿನ ಸಾಂತ್ವಾನ.


ಕ್ಯಾಮೆರಾ ಕೋವಿಗೆ ದಿಗಿಲುಗೊಂಡ ನೋಟ.
© Karthik Ak

# ಜೇನಿನ ಜೀವನ

ಜೂಯ್.... ಎಂದು ಜಿನುಗುಡುವ ಜೇನು ಹುಳುವು
ಹುಡುಕುತ ಹೊರಟಿತು ಹೂ ಇರುವ ಸ್ತಳವ
ಕಂಡಿತು ಒಂದು ದೊಡ್ಡ ಹೂವಿನ ತೋಟವ
ಆ ಹೂವಿನ ಮಕರಂದ ಕಲಕಿತು ಅದರ ಮನವ

ಈ ಸುದ್ದಿಯನು ತಿಳಿಸಲು ಹೊರಟಿತು ಗೂಡಿಗೆ
ತನ್ನ ಒಡನಾಡಿಗಳನ್ನು ಮತ್ತೆ ಕರೆ ತಂದಿತು ಹೂವಿಗೆ
ಹುಳುಗಳೆಲ್ಲವು ಮಕರಂದವನ್ನು ತುಂಬಿಕೊಂಡವು ಹೊಟ್ಟೆಗೆ
ಅದನ್ನು ಹೊತ್ತಿ ಹೋದವು ಗೂಡಿನಲ್ಲಿರುವ ಮರಿಗಳಿಗೆ

ಹೀಗೆ ಕೆಲಕಾಲ ಕೂಡಿಟ್ಟವು ಜೇನನು
ಗೂಡಿನಿಂದ ಮರಿಗಳು ಹೊರ ಬರುತ್ತಿದ್ದವು ಇನ್ನೇನು
ಅಷ್ಟರಲ್ಲಿ ಹಾಕಿದರು ಗೂಡಿಗೆ ಹೊಗೆಯನ್ನು
ಮರಿಗಳ ಜೊತೆ ಹುಳುಗಳು ಬಿಟ್ಟವು ಗೂಡನು

ಜೇನು ತುಪ್ಪಕ್ಕಾಗಿ ಹೆಚ್ಚಾಯಿತು ನಮ್ಮ ಆಸೆ
ಹುಳುಗಳ ಜೀವನವೆಲ್ಲಾ ಬರಿ ವಲಸೆ ವಲಸೆ
ಜೇನುಗೂಡು ಎಲ್ಲಿ ಇದ್ದರು ನೀಗುತಿಲ್ಲ ಅವನಾಸೆ
ಹೀಗಾದರೆ ಅವುಗಳ ಸಂತತಿ ಬೆಳೆಯುವುದು ಹೇಗೆ ಕೂಸೆ

- ಧನರಾಜ್ .ಎಂ